ಉದಯೋಽಸ್ತು.



॥ ಶ್ರೀ ॥



# ರೇಣುಕಾಂಬಾ ಸ್ತೋತ್ರಂ.

॥ सदमल कृपयामांपाहि भो ! रेणुकांब ॥

ಶಿ. ಯ. ವಾಜಪೇಯ.

ಪುಸ್ತಕಗಳು ಕಾವ್ಯಕರ್ತರಲ್ಲಿ ದೊರೆವುವು.

ಇಸವಿ. ] [ ಬೆಲೆ ೨ ಆಣೆ.

॥ ಶ್ರೀ ॥

# ಶ್ರೀರೇಣುಕಾಂಬಾಸ್ತೋತ್ರಂ




ಶಿವಾನಂದ ಯಜ್ಞೇಶ್ವರದೀಕ್ಷಿತ ವಾಜಪೇಯ

ಪೆನಶನರ ಮಾಸ್ತರ

ಇವರಿಂದ ವಿರಚಿತವಾದುದು.








ಶಕೆ ೧೮೫೧

ಶ್ರೀ ಶುಕ್ಲನಾಮಸಂವತ್ಸರ ಚೈತ್ರಶುದ್ಧ ೧

( ವರ್ಷಪ್ರತಿಪದೆ )





೧೯೨೯ ಇಸ್ವಿ. ] [ ಬೆಲೆ ೨ ಆಣೆ.

ಶ್ರೀ

# ಪೀಠಿಕೆ.

---

ಮನುಷ್ಯನು ಬಡವನಿರಲಿ, ಭಾಗ್ಯವಂತನಿರಲಿ, ಭೂಪನೇ ಇರಲಿ, ಜನ್ಮದಲ್ಲಿ ಸುಖ-ಸಂಪತ್ತು-ಘನತೆ-ಅಭೀಷ್ಟಪೂರ್ತಿಗಳಿಂದ ಬಾಳಿ ಸದ್ಗತಿಯನ್ನು ಹೊಂದಬೇಕಾದರೆ ಶ್ರೀದೇವರ ಅಂದರೆ ಶ್ರೀ-ಶ್ರೀಶರ ಅನುಗ್ರಹವು (ಕೃಪೆಯು) ಬೇಕು. ಇದೊಂದಿಲ್ಲದಿದ್ದರೆ ಅವನೆಂದೂ ಸುಖಿಸನು. ಇದು ನಿರ್ವಿವಾದವೂ ನಿದರ್ಶನಕ್ಕೆ ಬರುವುದೂ ನಿಶ್ಚಿತವೂ ಆದ ಸಂಗತಿಯದೆ. ಆದುದರಿಂದ ಮನುಷ್ಯನು ಶ್ರೇಷ್ಠವಾದ ಈ ಮನುಷ್ಯಜನ್ಮದಲ್ಲಿ ಸಾಧಿಸತಕ್ಕ ದುರ್ಮಿಳವಾದ ಇಹ-ಪರಹಿತಂಗಳಿಗೆ ಶ್ರೀ ದೇವರ ಕೃಪೆಯೇ ಅವಶ್ಯವಾಗಿ ಇದನ್ನು ಪಡೆಯಲು ಎಲ್ಲರೂ ಯತ್ನಯಿಸತಕ್ಕುದಾಗಿದೆ. ಶ್ರೀ-ಶ್ರೀಶರಲ್ಲಿ ವಿಶುದ್ಧವಾದ ಅಂದರೆ ನಿಷ್ಕಾಪಟ್ಯದ ಅಖಂಡ ಭಕ್ತಿಯನ್ನಾಚರಿಸುವುದೇ ಇದಕ್ಕುಪಾಯವು.

ನಾನು ಎಂದಿನಿಂದ ಬಂದಿಷ್ಟು ದೇವಭಕ್ತಿಪರಾಯಣನು. ನನ್ನ ಸಕಲ ಕರ್ತವ್ಯಂಗಳು ಅವರ ದಯೆಯಿಂದಲೇ ಸುರಳಿತವಾಗಿ ಸಾಗುವುವು, ಒಳಿತುಗೊಡುವುವಾಗುವುವು ಎಂಬ ನಂಬಿಗೆಯವನು. ಒಂದುದಿನ ನಿತ್ಯದಂತೆ ಈ ನಾನು ಊರಹೊರಗೆ ಅಡ್ಡಾಡಲಿಕ್ಕೆ ಹೋದಾಗ್ಗೆ-"ಜನ್ಮವು ಅಶಾಶ್ವತವು, ಈ ನರಜನ್ಮವು ಸತ್ಕಾರ್ಯಂಗಳನ್ನೆಸಗಲು ಆಸ್ಪದವಾದುದುಂಟು; ಆಕಾರಣ ಸತ್ಕಾರ್ಯಂಗಳನ್ನೆಸಗಬೇಕು, ಇದು ಜನ್ಮಕ್ಕೆಹಿತವು ಹಾಗು ಸಾರ್ಥಕವು." ಎಂಬುದೊಂದು ಕಂದಪದ್ಯವು ಈ ನನ್ನ ಬಾಯಿಂದ ರಚಿತವಾಗಿ ಬಂದಿತು. ಇದರಂತೆ ಮತ್ತೊಂದು ಪದ್ಯವೂ ಈಗ್ಗೇ ಉಂಟಾಯಿತು. ಅದು ಅನ್ಯೊಂದು ಈಬಗ್ಗೆ ಸಂಬಂಧವಾದುದಲ್ಲ. ಮೊದಲುಂಟಾದ ಪದ್ಯದಿಂದ ನಾನು-"ಶ್ರೀ-ಶ್ರೀಶರಿಷ್ಟು ಕರುಣಿಸಿ ಅಲ್ಪ-ಸ್ವಲ್ಪ ಕವಿತಾಶಕ್ತಿ

ಯನ್ನು ಈ ನನಗೆ ಕೊಟ್ಟುದಕ್ಕೆ ನಾನೇನು ಅವರನ್ನು ತಕ್ಕಂತೆ ಹೊಗಳಿರಲಿಲ್ಲ; ಧೂರ್ತವಿಚಾರಮಾಡಲಿಲ್ಲ; ನರಸ್ತುತಿಯನ್ನುಮಾತ್ರ ಆಸೆಬಟ್ಟುಮಾಡಿದೆನು; ಬುದ್ಧಿದಪ್ಪಿದೆನು.'' ಎಂತ ಅವರ ಪ್ರೇರಣೆ ಯಿಂದಲೇ ಇದರ ಸಾರವನ್ನು ಭಾವಿಸಿ ಮನಕ್ಕೆತಂದು, ಶ್ರೀ ಜಗ ನ್ಮಾತೆಯೂ ಜಗದ್ಧಾತ್ರಿಯೂ ಭಕ್ತವತ್ಸಲೆಯೂ ಇಷ್ಟದೇವತೆಯೂ ಆದ ಶ್ರೀರೇಣುಕಾಂಬಿಕೆಯು ಈ ಸ್ತೋತ್ರಕಾವ್ಯವನ್ನು ಮಾಡುವವ ನಾದೆನು. ಹಾಗು ನನ್ನ ಪ್ರಿಯ ದೇಶಬಂಧುಗಳೇ! ಈಗ ಇದನ್ನು ಹಿತಾರ್ಥದೃಷ್ಟಿಯಿಂದ ಮುದ್ರಿಸಿ ತಮ್ಮಮುಂದೆ ಇಟ್ಟಿರುವೆನು.

ಒಟ್ಟಿಗೆ–ಜಗನ್ನಿಯಾಮಕರಾದ ಶ್ರೀ–ಶ್ರೀಶರು, ಬಹುರೂಪ–ನಾಮಂಗಳನ್ನು ತಾಳಿ ತಮ್ಮ ಶಾಸನ–ಪೋಷಣಶಕ್ತಿಗಳ ಯೋಗದಿಂದ ದುಷ್ಟ–ನಿಗ್ರಹವನ್ನುಮಾಡಿ ತಮ್ಮ ಭಕ್ತಿವಿಶಿಷ್ಟಶಿಷ್ಟರನ್ನು ಪೋಷಿಸಿ ತೋಷಿಸುತ್ತಿರುವರು. ಆದಕಾರಣ ನಾವು ಅಭೇಧಬುದ್ಧಿಯಿಂದ ಅಜ ಸ್ರದಲ್ಲಿ ಶ್ರೀಭಕ್ತಿಯಿಂದಕೂಡಿ ನಮ್ಮಿಷ್ಟಪೂರ್ತಿಗೊಂಡು ಆನಂದವುಳ್ಳ ವರಾಗಬೇಕೆಂದು ತಮ್ಮೆಲ್ಲರನ್ನು ಬಯಸಿ ವಿನಂತಿಸಿಕೊಂಡು ಅಂತೆ ಶ್ರೀಯನ್ನು ಪ್ರಾರ್ಥಿಸಿ ನಮಿಸಿ ಈ ಲೇಖವನ್ನು ಮುಗಿಸುವೆನು.

ತಮ್ಮ,

**ಗದಗ.** | **ಶಿವಾನಂದದೀಕ್ಷಿತ. ಯ. ವಾಜಸೇಯನು.**
೧೦–೪–೨೯. | ಸ್ತೋತ್ರಕರ್ತನು–ಶ್ರೀಭಕ್ತಿಪರಾಯಣನು.



॥ ಶ್ರೀ ॥

# ಶ್ರೀ ರೇಣುಕಾಂಬಾಸ್ತೋತ್ರಂ



## ಮಂಗಳಾಚರಣಂ

ಶ್ರೀಮಂಗಳ ಮೂರ್ತಿಗೆ ವಂದನಂ
ಶ್ರೀರೇಣುಕಾಂಬೆಗೆ ವಂದನಂ
ಶ್ರೀಲಕ್ಷ್ಮೀನರಸಿಂಹಂಗೆ ವಂದನಂ
ಶ್ರೀ ಶಾರದಾಂಬೆಗೆ ವಂದನಂ
ಶ್ರೀ ಕೋಡಿ ಯೆಲ್ಲಮ್ಮನಿಗೆ
ಶ್ರೀಶ್ಯಾಮಲಾಂಬೆಗೆ ವಂದನಂ
ಶ್ರೀದತ್ತಗುರುಗೆ ವಂದನಂ

## ಸ್ತೋತ್ರಾರಂಭವು.

### ವಸಂತ ತಿಲಕಂ

ಶ್ರೀಮದ್ಧರಾವಲಯಪಾಲನಪುಣ್ಯಶೀಲೆ ।
ಸೋಮಾರ್ಕಕಾಂತಿಯುತೆ ದಿವ್ಯಸುಚಿತ್ರಲೀಲೆ ॥
ಭೀಮಾಘಹಾರಿಣಿ ಭವಾರ್ದಿನಿ ನೀಂ ಮದಂಬೆ ।
ಪ್ರೇಮಂಮಿಗೆಮ್ಮನಿರದಾ! ಪೊರೆ ರೇಣುಕಾಂಬೆ ॥೧॥

೧೬
ರಾಮೇಷ್ಟಮಾತೆ ಜಮದಗ್ನಿಸುಖಪ್ರಯುಕ್ತೆ ।
ಹೈಮಾದ್ರಿ ಭಕ್ತಜನಸಂಭ್ರಮೆ ಲೋಕಮಾತೆ ॥
೧ ೨
ದ್ವೈಮಾತುರೇಷ್ಟಕರಿ ಶಂಕರಿ ಶಾರದಾಂಬೆ ।
ಕ್ಷೇಮಮ್ಮಿಗೆಮ್ಮನಿರದಾ! ಪೊರೆ ರೇಣುಕಾಂಬೆ ॥೨॥

೨
ಶ್ರೀವಾಗುಮಾತ್ರಿಕಸುದೀಪ್ತಮನೋಜ್ಞರೂಪೆ ।
ದೇವೇಶಿ ನೀಂ ಮಹಿಷಮರ್ದಿನಿ ಸುಪ್ರತಾಪೆ ॥
ದೈವಜ್ಞೆ ದೈನ್ಯಹರೆ ದಾರಿತಭಕ್ತತಾಪೆ ।
ಧೀವಿತ್ತದಿಂದಲಿರದಾ ! ಪೊರೆ ರೇಣುಕಾಂಬೆ ॥೩॥

೧೦ + ೧೩
ಶಿಷ್ಟಾತ್ಮತೋಷಿಣಿ ಯಶೋಧನೆ ಭಾಗ್ಯಲಕ್ಷ್ಮಿ ।
ದುಷ್ಟಾತ್ಮಘೋರೆ ಭುವನೇಶ್ವರಿ ನೀಂ ಭವಾನಿ ॥
ಅಷ್ಟಾಯುಧಾಂಚಿತಭಯಾ-ಭಯಭವ್ಯಪಾಣಿ ।
ಶ್ರೇಷ್ಠತ್ವದಿಂದಲಿರದಾ! ಪೊರೆ ರೇಣುಕಾಂಬೆ ॥೪॥
ರಂಭಾದಿರೂಪರುಚಿದೂಷಣರಾಜಿತಾಂಗಿ ।
ಸುಂಭಾದಿರುಂಡಚಯಧಾರಣಭೀಷಣಾಂಗಿ ॥
ಸಾಂಬಾರ್ಧಕಾಯೆ ಕರುಣಾಲಯೆ ಶ್ಯಾಮಲಾಂಗಿ ।
ಗಾಂಭೀರ್ಯದಿಂದಲಿರದಾ! ಪೊರೆ ರೇಣುಕಾಂಬೆ ॥೫॥

---

೧ ಶ್ರೀ ಗಣಪತಿಯಹೆಸರು ಇದರಂತೆ ಬಾಲಬೋಧದ ಅಂಕೆಗಳು ಶ್ರೀ ದೇವರ ಹೆಸರು ತೋರುವುವು.

೨ ಶ್ರೀ ಶಾರದಾಂಬೆಯ ಹೆಸರು

೨ ಸ್ತೋತ್ರಕರ್ತನ ತಾಯಿಯ ಹೆಸರು.

ಚಂದ್ರಾಸ್ಯೆ ಸುಂದರಸುರತ್ನಕಿರೀಟತೋಷೆ |
ಸಂದೀಪ್ತವಜ್ರಮಣಿಕುಂಡಲಕಾಂತಿಭೂಷೆ ||
ಚಂದ್ರಸ್ರಗುದ್ಭವಸುಕಾಂತಿಮಯಾಂಗದೇಶೆ |
ಸೌಂದರ್ಯದಿಂದಲಿರದಾ! ಪೊರೆ ರೇಣುಕಾಂಬೆ ||೬||

ಇಂದೀವರಾಕ್ಷಿ ದರಹಾಸಿನಿ ಸತ್ಯವಾಣಿ |
ಗಂಧರ್ವಶಂಸಿಸಿ ಸುಕೃಷ್ಣಭುಜಂಗವೇಣಿ ||
ಸಿಂದೂರ-ಚಂದನವಿರಾಜದುರೋಜಫಾಲೆ |
ಬಾಂಧುರ್ಯದಿಂದಲಿರದಾ! ಪೊರೆ ರೇಣುಕಾಂಬೆ ||೭||

ಭೂಭಾರವನ್ನಿಳುಹಲೆಂದಿಳೆದಿಲ್ಲಿಗೈತಂ |
ದಾಭೂದುರಾತ್ಮರಶಿರಂಗಳ ಭೇದಿಸುತ್ತಂ ||
ಈಭೂಮಿಯಂ ನಲಿಸಿಹಾನತಕಲ್ಪವೀನೀಂ |
ಸೌಭಾಗ್ಯದಿಂದಲಿರದಾ! ಪೊರೆ ರೇಣುಕಾಂಬೆ ||೮||

ಈಶಾನಿ ವಾಯುತನು ವಾರುಣಿ ವಾಹ್ನಿಯಾಮ್ಯೆ |
ಶ್ರೀಸಿದ್ಧಿ ವೈಶ್ರವಣಿ ನೈರುತಿ ಸೌಮ್ಯೆ ಐಂದ್ರಿ ||
ಶ್ರೀಸರ್ವಮಂಗಳೆ ಸುಭದ್ರೆ ಷಡಾಸ್ಯಮಾತೆ |
ಶ್ರೀಸೌಖ್ಯದಿಂದಲಿರದಾ! ಪೊರೆ ರೇಣುಕಾಂಬೆ ||೯||

ಓಂಕಾರೆ ವಾಕ್ಪ್ರದೆ ಸುವೈಷ್ಣವಿ ಈಶಿ ಬ್ರಾಹ್ಮಿ |
ಕ್ಲೀಂಕಾರೆ ಕಾಮದೆ ಕವಿತ್ರಿ ಕವಿತ್ವಶಕ್ತಿ ||
ಶ್ರೀಂಕಾರೆ ದಾತ್ರಿ ಶಿತಿಕಂಠಸುಖಪ್ರಯುಕ್ತೆ |
ಹ್ರೀಂಕಾರೆ ಕಾಂಕ್ಷೆಗಳಿನಾ! ಪೊರೆ ರೇಣುಕಾಂಬೆ ||೧೦||

ಬಾಲಾ-ಸತೀಷ್ಟತರುಣೀತ್ರಿವಯಸ್ಸ್ವರೂಪೆ |
ಏಲಾಂಬೆ ಕ್ರೋಧ-ಸುಖ-ರಾಗಮನೋವಿಶಿಷ್ಟೆ ||

ಕಾಲತ್ರಯಜ್ಞೆ ತ್ರಿಗುಣಾಢ್ಯೆ ತ್ರಿವೇದಮಾತೆ |
ಶೀಲಂಮಿಗೆಮ್ಮನಿರದಾ! ಪೊರೆ ರೇಣುಕಾಂಬೆ ||೧೧||
ಶಾಪಾ-ಶಿಷಂಗಳ ಬಲಾಢ್ಯೆ ಶುಭಾ-ಶುಭಾಂಕೆ |
ಚಾಪಾ-ಸ್ತ್ರಹಸ್ತೆ ಗರಳಾಮೃತಪಾನಶಕ್ಯೆ ||
ಭೂಪಾಲಸಾರಕುಲಸಂಭವೆ ವೀರಭಾರ್ಯೆ |
ಸ್ವೈಪಿಂದಲೆಮ್ಮನಿರದಾ ! ಪೊರೆ ರೇಣುಕಾಂಬೆ ||೧೨||
ಕಾಮಾಕ್ಷಿ ಶ್ರೀಧರಿ ಕುಮಾರಿಕೆ ವೀರಮಾತೆ |
ಸಾಮಪ್ರಹರ್ಷೆ ಮಣಿಮಂಡಿತಸಿಂಹಪೀಠೆ ||
೨೭ ೨೮ ೧+೧೪
ಸೋಮಪ್ರಮೋಹಿನಿ ಸುದೀಕ್ಷಿತೆ ಯಜ್ಞರೂಪೆ |
ಕಾಮ್ಯಾರ್ಥದಿಂದಲಿರದಾ ! ಪೊರೆ ರೇಣುಕಾಂಬೆ ||೧೩||
೧೫ ೨೦ ೨೩
ಕಾವೇರಿ ಗೌತಮಿ ಸರಸ್ವತಿ ಗಂಗೆ ತುಂಗೆ |
ರೇವಾ-ತ್ರಿವೇಣಿಗಳು ಗಂಡಕಿ ಚಂದ್ರಭಾಗೆ ||
೬ ೯+೧೮
ಸಾವಿತ್ರಿ ದತ್ತಜನಿ ನರ್ಮದೆ ಭೀಮೆ ನೀನು |
ಪ್ರಾವೀಣ್ಯದಿಂದಲಿರದಾ! ಪೊರೆ ರೇಣುಕಾಂಬೆ ||೧೪||
ವೈದೇಹಿ ದ್ರೌಪದಿಯಹಲ್ಯೆ ದಶಾಸ್ಯಪತ್ನಿ |
ಶ್ರೀದೇವಿ ಚಂದಲೆ ಲಸತ್ತುಳಜಾಭವಾನಿ ||
ಭೂದೇವಿ ಶೀತಳೆಯರುಂಧತಿ ತಾರೆ ನೀನು |
ಮೋದಂಮಿಗೆಮ್ಮನಿರೆದಾ! ಪೊರೆ ರೇಣುಕಾಂಬೆ ||೧೫||

---

೧ ಸ್ತೋತ್ರಕರ್ತನ ತಂದೆಯ ಹೆಸರು, ಇದರಂತೆ ಕನ್ನಡದ ಅಂಕಿಗಳು ಸ್ತೋತ್ರಕರ್ತನ ಬಳಗದವರ ಹೆಸರು ಸೂಚಿಸುವವು.

೨೭ ಇದೇವೇಳೆಗೆ ಹಿರಿಯ ಅಣ್ಣಂದಿರುಮಾಡಿದ ಸೋಮಯಾಗ ಸೂಚಕವು. ೨೮ ಸ್ತೋತ್ರಕರ್ತನ ಮನೆತನದ ಉಪನಾಮವು.

ಶ್ರೀಚಕ್ರೆ ಶ್ರೀಲಲಿತೆ ಮಾಲಸೆ ಯನ್ನಪೂರ್ಣೆ |
೧೧
ಶ್ರೀರಮ್ಯಕಾಶಿ ಸದಯೋಧ್ಯೆಯವಂತಿಮಾಯೆ ||
೧೯
ದ್ವಾರಾವತೀ-ಮಥುರೆಗಳ್ ಜಗವಿನ್ನುನೀನೆ |
ಕಾರುಣ್ಯದಿಂದಲಿರದಾ ! ಪೊರೆ ರೇಣುಕಾಂಬೆ ||೧೬||

ಶ್ರೀತೋಂತಲಾಂಬೆ ಮಹಿ ಕೃಷ್ಣೆಯಗಸ್ತ್ಯಪತ್ನಿ |
ಮಾತಾಪುರಸ್ಥೆ ಶಚಿಗೋಮತಿ ನೀನೆಸರ್ವಂ ||
೨೨
ಧೂತಾನತೌಘಕೃತಕೋಟಿಮಹಾಪರಾಧೆ |
ಖ್ಯಾತಿತ್ವದಿಂದಲಿರದಾ ! ಪೊರೆ ರೇಣುಕಾಂಬೆ ||೧೭||

೨೪
ಪೂಬಂಡುಮೆಲ್ವಳಿಯಬಣ್ಣದ ಭದ್ರಕಾಳಿ |
ಸೌಭಾಗ್ಯ-ಸೌಖ್ಯದೆ ಸುಧೀರೆ ಸುವೀರೆ ಶೂರೆ ||
ಲಾಭಾದಿರೂಪಿಣಿ ಯಶಃಪ್ರದೆ ಏಕವೀರೆ |
ಭೂಭಾಗ್ಯದಿಂದಲಿರದಾ ! ಪೊರೆ ರೇಣುಕಾಂಬೆ ||೧೮||

ಮಾರಪ್ರಿಯಾಸುತೆ ವಿನಾಯಕಿ ವಿಷ್ಣುಶಕ್ತಿ |
ವಾರಾಹಿ ಕೂರ್ಮಬಲೆ ವಾಮನಿ ನಾರಸಿಂಹಿ ||
ಶ್ರೀರಾಮವಿಕ್ರಮೆ ವಿರಾಟ್ತನು ವಿಶ್ವಶಕ್ತಿ |
ಧೀರತ್ವದಿಂದಲಿರದಾ ! ಪೊರೆ ರೇಣುಕಾಂಬೆ ||೧೯||

ವೈಶ್ವಾನರಾಕ್ಷಿ ವರವರ್ಣಿನಿ ವಜ್ರಶಕ್ತಿ |
ವಿಶ್ವಾಕ್ಷಿ ವನ್ಹಿಜೆ ವಿಮಾನವರೂಥೆ ರಾತ್ರಿ ||
ಭಾಸ್ವದ್ರವೀ-ಂದುದೃಶೆ ಶ್ರೀಶಮಿ ಸರ್ವಶಕ್ತಿ |
ಸುಸ್ವಾವಲಂಬನದೊಳಾ ! ಪೊರೆ ರೇಣುಕಾಂಬೆ ||೨೦||

೧೭
ಶ್ರೀಶಾಂತೆ ಸಾಕೃತಿ ನಿರಾಕೃತಿ ಮಂತ್ರಸಿದ್ಧಿ ।
ಶೇಷಾತಿಶಕ್ತಿ ಬಲಿ-ಮಾರುತಿ-ಭೀಮಶಕ್ತಿ ॥
ಶ್ರೀಶೇಷಶಯ್ಯೆ ವೃಷವಾಹನೆ ನಾಗಭೂಷೆ ।
ಪ್ರಾಸಾದಿಕೇಕ್ಷಣದೊಳೌ ! ಪೊರೆ ರೇಣುಕಾಂಬೆ ॥೨೧॥
ಮಾತಂಗಿ ಧರ್ಮಬಲೆ ಬ್ರಹ್ಮಸುಶಕ್ತಿ ಜೈತ್ರಿ ।
ಪೀತಾಂಬರಪ್ರಿಯೆ ಸುಶಾಂಭವಿ ಶಾಸ್ತ್ರಶೂರೆ ॥
ಮಾರ್ತಾಂಡಿ ಮಾತೃಗಣಮಂಡಿತೆ ವೈದ್ಯಮಾತೆ ।
ಸ್ವಾತಂತ್ರ್ಯದಿಂದಲಿರದೌ ! ಪೊರೆ ರೇಣುಕಾಂಬೆ ॥೨೨॥
ಶ್ರೀಕಾರಣಾಕೃತಿ ಸುವಾಣಿ ಸುವಿದ್ಯೆ ಬುದ್ಧಿ ।
ವೈಕುಂಠಮೂರ್ತಿ ಸುಪಚಕ್ರಿಯೆ ಪಾಕಶಕ್ತಿ ॥
ಶ್ರೀಕೋಲರೂಪೆ ಕೃತಸೃಷ್ಟಿ ಸುಸೃಷ್ಟಿ ನೀನು ।
ಶ್ರೀಕಾಂತಿಯಿಂದಲಿರದೌ ! ಪೊರೆ ರೇಣುಕಾಂಬೆ ॥೨೩॥
ಮಾಹೇಂದ್ರಿ ಕ್ಷೀರಜಲಧಿಪ್ರಿಯಪುತ್ರಿ ಧಾತ್ರಿ ।
ಸಾಹಸ್ರವರ್ಣಫಲದಾಯಿನಿ ಅಷ್ಟಮೂರ್ತಿ ॥
ಸೋಹಂವಿಶಿಷ್ಟೆ ಕೃಷಿಕರ್ಮಫಲಪ್ರತಿಷ್ಠೆ ।
ಸ್ನೇಹಾರ್ದ್ರದೃಷ್ಟಿವರೆದೌ ! ಪೊರೆ ರೇಣುಕಾಂಬೆ ॥೨೪॥
ಶ್ರೀಪುಷ್ಟಿ-ತುಷ್ಟಿದೆ ಸುರಾ-ಸುರ-ಸಿದ್ಧವಂದ್ಯ ।
೩
ಶ್ರೀಪಾದಪದ್ಮೆ ವಿಜಯೋದ್ಭವನಿತ್ಯಕಲಾಂಬೆ ॥
ಪಾಪೇಷ್ಟಪುಣ್ಯಫಲದಾಯಿನಿ ದಕ್ಷಕನ್ಯೆ ।
ಸ್ತ್ರೀ-ಪುತ್ರ-ಪೌತ್ರಸುಖದಿಂ ಪೊರೆ ರೇಣುಕಾಂಬೆ ॥೨೫॥

---

೩ ಸ್ತೋತ್ರಕರ್ತನ ಅಣ್ಣಂದಿರ ಹೆಸರು. ಶ್ರೀಸೋಮಯಾಗ ಮಾಡಿದವರು.

ಆನಂದರೂಪಿಣಿ ಸುಧಾಸಮಮಂಜುವಾಣಿ ।
ಮೈನಾಕನೊಲ್ಮೆಯ ಸಹೋದರಿ ನೀಂ ಶಿವಾನಂ ॥
ದಾನಂತಸೌಖ್ಯದೆ ಸುರಕ್ಷಿಕೆ ಅನ್ನದಾತ್ರಿ ।
ನೀನಲ್ಲದಾರಿರುವರೌ ! ಪೊರೆ ರೇಣುಕಾಂಬೆ ॥೧೬॥
ಕೋಲ್ಹಾಪುರಾಲಯೆ ಸುಕೀರಸುವಾಕ್ಯಹರ್ಷೆ ।
ಕಲ್ಹಾರ-ಕೇತಕವಿರಾಜಿತಕೇಶಪಾಶೆ ॥
ಭಿಲ್ಲೀಸುವೇಷಸುಮನೋಹರೆ ಭಕ್ತಸಾರೆ ।
ಸೋಲ್ಲಾಸದಿಂದಲಿರವೌ ! ಪೊರೆ ರೇಣುಕಾಂಬೆ ॥೧೭॥
ವಿಂಧ್ಯಾದ್ರಿನಿಕ್ಷಳೆ ಹಿಮಾಚಲಕೇಳಿಲೋಲೆ ।
ಮಂದಾರಮರ್ಘನಳಕೂಬರಿಯಿಷ್ಟರತ್ನಂ ॥
ಬೃಂದಾರಘೋಸುವಳಕಾಲಯೆ ಸಂಧ್ಯೆನೀನು ।
ಸಂಧ್ಯಾನಮಿತ್ತು ಸಲೆಯೌ ! ಪೊರೆ ರೇಣುಕಾಂಬೆ ॥೧೮॥
ಮತ್ತೇಭಗಾಮಿನಿ ಮಹೋದಯೆ ಮಾರರೂಪೆ ।
ಮೃತ್ಯುಂಜಯಾತ್ಮಿಕೆ ಮಹಾತ್ಮಿಕೆ ಮೋಹರೂಪೆ ॥
ಶ್ರುತ್ಯಾದಿಸಂಸ್ತುತೆ ಶುಭೋದಯೆ ತತ್ವವೇತ್ತೆ ।
ಪ್ರತ್ಯಕ್ಷಮಾಗಿಯೊಲಿದೌ ! ಪೊರೆ ರೇಣುಕಾಂಬೆ ॥೧೯॥
ಕಾಂತಾರವಾಸಿನಿ ಸುಯೋಗ-ಸುಮೋಘಶಕ್ತಿ ।
ಚಿಂತಾಪಹಾರಿ ಸುಮುದಂಕರಿ ಯಾಗಶಕ್ತಿ ॥
ಕುಂತೀಸುತಾ-ಬ್ಜನಯನಪ್ರಿಯೆ ಲೋಕನೀತಿ ।
ಸಂತೃಪ್ತಿಯಾಗುವವೊಲೌ ! ಪೊರೆ ರೇಣುಕಾಂಬೆ ॥೨೦॥
ಸಾಯುಜ್ಯರೂಪೆ ವಿಜಯಧ್ವನಿ ವಿಶ್ವಪಾಲಿ ।
ಗಾಯತ್ರಿ ಗಾನಪದೆ ವಾದ್ಯನಿನಾದಲೋಲಿ ॥
ಆಯುಷ್ಯದಾಯಿನಿ ಅನುತ್ತಮೆ ಆರ್ಯೆ ಶೌರ್ಯೆ ।
ಶ್ರೇಯಂಮಗೆಮ್ಮನಿರದೌ ! ಪೊರೆ ರೇಣುಕಾಂಬೆ ॥೨೧॥

೪

ನೀನೇ ಜಗಕ್ಕೆನಿಸುತಿಪ್ಪ ಮಹೇಶಿ ತಾಯಿ ।
ನೀನೇ ನತರ್ಗೆ ಭಯಕೃದ್ಭಯನಾಶಕರ್ತ್ರಿ ॥
ನೀನಿಷ್ಟನುಗ್ರಹಿಸೆ ಧನ್ಯರು ನಾವಪರ್ಣೆ ।
ಮಾನಂಮಿಗೆಮ್ಮನಿರದಾ! ಪೊರೆ ರೇಣುಕಾಂಬೆ ॥೩೨॥

ಆವಾಶ್ರಯಂ ಬೆಳೆಗಲಕ್ಷಿಸೆ ಮೇಘರಾಜಂ ।
ಗೋವೊಂದು ಪಾಲುಣಿಸದಾ ಕರುವೆಂತು ಬಾಳ್ಗುಂ ॥
ಈವೋವ ನೀಂ ಬಿಡಲು ಕಾವರದಾರು ನಮ್ಮ
ನ್ನೀವತ್ಸರಂ ಕೃಪೆಯೊಳಾ! ಪೊರೆ ರೇಣುಕಾಂಬೆ ॥೩೩॥

ಶ್ರೀದೇವಿ ಕಾವನಿಳೆಯಂ ಗಡ! ವಿಷ್ಣು ನಿನ್ನಿಂ ।
ಶ್ರೀದೇವಿ ಶ್ರೀಪದಮನಾಂತನು ಜಿಷ್ಣು ನಿನ್ನಿಂ ॥

೭

ಶ್ರೀದೇವಿ ಬಾಳುವುದು ಸೌಖ್ಯದೊಳುರ್ವಿ ನಿನ್ನಿಂ ।
ಶ್ರೀದೇವಿ ವೈಭವದೊಳಾ! ಪೊರೆ ರೇಣುಕಾಂಬೆ ॥೩೪॥

೮ ೬

ಸರ್ವಜ್ಞೆ ಪಾರ್ವತಿ ನೃಸಿಂಹಮನಃಪ್ರಹರ್ಷೆ ।

೫

ಸರ್ವಾರ್ಥದಾತ್ರಿ ಶಿವೆ ಅಂಬಿಕೆ ಗೌರಿ ಕಾಳಿ ॥
ಶರ್ವಾಣಿ ಭಾರ್ಗವಿ ಮೃಡಾಣಿ ಶರಣ್ಯೆ ದುರ್ಗೆ ।
ಸರ್ವಾರ್ಥದಿಂದಲಿರದಾ! ಪೊರೆ ರೇಣುಕಾಂಬೆ ॥೩೫॥

೯

ಮಾಕಾಳಿ-ಮಾಲಕುಮಿ-ಶಾರದೆಯಾದನೀನ ।
ಹಾಂಕಾರದಿಂ ಭವಿಸಿ ಮಾಪುರದೀಶಿಯಪ್ಪ ॥

೪

ವಿಖ್ಯಾತೆ ಭಕ್ತಜನತೋಷಿಕೆ ಕೋಡಿಯೆಲ್ಲ ।
ಮ್ಮಾಖ್ಯಾಂಬೆಯಾದೆಯೊಲಿದಾ! ಪೊರೆ ರೇಣುಕಾಂಬೆ ॥೩೬॥

ನಿನ್ನನ್ನು ಪೂಜಿಸಲುಮೀಶ್ವರ ಪೂಜೆಯಕ್ಕುಂ ।
ನಿನ್ನನ್ನು ಸೇವಿಸಿರೆ ಶ್ರೀ-ಹರಿಸೇವೆಯಕ್ಕುಂ ॥
ನಿನ್ನೊಲ್ಮೆಯಿಂದೆ ವಿಧಿವಾಣಿಗಳೊಲ್ಮೆಯಕ್ಕುಂ ।
ಪ್ರಾಸನ್ನತ್ಯದಿಂದಲಿರದಾ ! ಪೊರೆ ರೇಣುಕಾಂಬೆ ॥೩೭॥
ಶ್ರೀಕಾಂತಶೈಲಮುಡರ್ವಂ ಹೆಳವಂ ಗಡಾ ! ತಾಂ ।
ಮೂಕಂ ಬೃಹಸ್ಪತಿಯಹಂ ಸಲೆ ಕಾಂಬನಂಧಂ ॥
ಸೌಕರ್ಯದಿಂ ಬಧಿರನಾಲಿಪನೆಲ್ಲಮುಂ ಶ್ರೀ ।
ಮಾಕಾಳಿಯೊಲ್ಮೆಯಿರೆ ಭಾವಿಸಲೇನಸಾಧ್ಯಂ ॥೩೮॥
ಆವಂಧ್ಯೆ ಪುತ್ರಯುತೆ ಸಂಜಮುರ್ದಿನ್ನು ತಕ್ಕಂ ।
ತಾ ವನ್ನಿ ಶೀತಳಮುಭಾಗ್ಯದ ದೀನಕನ್ಯೆ ॥
ಶ್ರೀ-ವೈಭವಾಢ್ಯಪತಿಭೂಷಿಣಿಯಾಗಿಹರ್ ಶ್ರೀ ।
ದೇವೀಕೃಪಾಮಹಿಮೆಯಾನತರಿಷ್ಟದಂ ದಲ್ ॥೩೯॥
ನಾರೀಜನರ್ ಸುಭಗೆಯರ್ ಸುಖಸೂತಿಗಳ್ ಮ ।
ತ್ತಾರಾತಿಗಳ್ ಜನಿಸರಾ ಮನೆ ಶಾಂತಿಯುಕ್ತಂ ॥
ಆರಿರ್ಪರಂಬಿಕೆಯ ಕೀರ್ತಿಸೆ ಶಕ್ಯರಾದರ್ ।
ಶ್ರೀರೇಣುಕಾಂಬೆಯಮಪೆಸರ್ * ಸ-ರ-ಸಪ್ರಪೂರ್ಣಂ ॥೪೦॥
ನೋಡೌ ! ಸುತರ್ಕಳಿಹೆವಾವೆನುತೊಲ್ಮೆಯಿಂದಂ ।
ಮಾಡೌ ! ದಯಾಶಿಷವನೆಮ್ಮಯ ಮೇಲದೆಂದುಂ ॥
ನೀಡೌ ! ಸುಸಂತತಿ-ಸುಭಾಗ್ಯ-ಯಶಂಗಳನ್ನು ।
ಪ್ರಾಷತ್ವದಿಂದಲಿರದಾ ! ಪೊರೆ ರೇಣುಕಾಂಬೆ ॥೪೧॥

---

* ಸ- ಸರ್ವಮಂಗಳೆ; ರ- ರಮೆ; ಸ- ಸರಸ್ವತಿ

ರಾರಾಜಿಪಾ ನಖಸರೋಗೃಹೆ ನೀಂ ಶಿವಾಸಂ |
ದಾರಾಧ್ಯೆ ಶ್ರೀತ್ರಿಪುರಸುಂದರಿ ರೇಣುಕನ್ಯೆ |
ವೈರಾಗ್ಯಧರ್ಮಧರೆ ವಿಶ್ವಕುಟುಂಬಭಾರೆ ||
ನಾರಾ[೧೨]ಯಣೇಷ್ಟೆ ದಯೆಮಾಡುರೆ ರೇಣುಕಾಂಬೆ ||೪೨||

ನಾನೆಯ್ದೆ ಮಂದಮತಿ ಭಕ್ತಿವಿಹೀನನೌ ಮು |
ತ್ತೀ ನಿನ್ನಯರ್ಚನೆಗೆ ಮಂತ್ರ-ಸುತಂತ್ರಹೀನಂ ||
ನೀನೆಮ್ಮ ಮಾತೆ ಜಡಬಾಲಕರಾವು ನಮ್ಮಂ |
ಮಾನೋನ್ನತೀಚ್ಛೆಗಳ ಪೂರಿಸಿ ಕಾವುದಂಬೆ ||೪೩||

## ಮಂದಾಕ್ರಾಂತವೃತ್ತಂ

ಶ್ರೀವಿಶಿಷ್ಟರೂಪೆ ವಿಶ್ವಪಾಲೆ ವೇದವರ್ಣಿತೆ |
ದೇವ-ದಾನವಾದಿಪೂಜ್ಯೆ ದಕ್ಷಕನ್ಯೆ ದೀಕ್ಷಿತೆ ||
ಪಾವನಾಂಗಿ ಪಾಪಭಂಗೆ ಪ್ರೇಮಪೂರ್ಣೆ ಪಾರ್ವತಿ |
ಕಾವುದೆಮ್ಮನೆಂದುಮೆಯ್ದೆ ದುರ್ಗೆ ಅಂಬೆ ಕಾಳಿಕೆ ||೪೪||

ಶ್ರೀಸರೋಜವಾಸೆ ವಾಸುದೇವವಾಮಭಾಮಿನಿ |
ಶ್ರೀಸುಧಾಬ್ಧಿಕನ್ಯೆ ಕಾಮಮಾತೆ ಕಾಮ್ಯಕಾರಿಣಿ ||
ವಾಸವಾದಿದೇವವೃಂದವಂದ್ಯೆ ವೈಭವಾಢ್ಯೆ ನೀ |
ನೈಸಲೆಮ್ಮನಿಷ್ಟದಿಂದೆ ಕಾವುದಿಂದಿರೇ ವರೇ ||೪೫||

ಶ್ರೀ ಸಿತಾಬ್ಜಪೀಠೆ ಬ್ರಹ್ಮ-ವಿಷ್ಣು-ಶಂಭುಮಾನಿತೆ |
ಭಾಸುರಾಂಗಿ ಶುಭ್ರವಸ್ತ್ರ-ಗಂಧ-ಪುಷ್ಪ ಪೂಜಿತೆ ||
ಶ್ರೀ-ಸುಧೀಗಳನ್ನು ನೀಡಲೆಯ್ದೆ ನಿನ್ನ ಪಾಡುವೆಂ |
ಪೋಷಿಸೆಮ್ಮನೊಲ್ಮೆಯಿಂ ದಯಾಬ್ಧಿ ಶಾರದಾಂಬಿಕೆ ||೪೬||

ಶ್ರೀಯೆ ನೀನು ಕಾಳಿ-ಲಕ್ಷ್ಮಿ-ಶಾರದಾಂಬೆಯೆಂಬುದಂ ।
ಕಾಯದಿಂದೆ ರೂಪನೆಯ್ದಿ ತೋರಿ ನಾಮದಿಂದಲಾ ॥
ಆಯಶಂಗಳಾಂತ ಕೋಡಿಯೆಲ್ಲಮಾಂಬೆಯೆನ್ನಿಪೆ ।
ಕಾಯಬೇಕು ಮಾಪುರಸ್ಥೆ ನಿನ್ನ ಭಕ್ತರಂ ಕರಂ ॥೪೭॥
ನೀನಗಮ್ಯಶೀಲೆ ಗೂಢಶಕ್ತಿ ಚಿತ್ರಲೀಲೆಯಿ ।
ದೇನುಪಾಡಲಾರ್ಪನೇ ಸಹಸ್ರಜಿಹ್ವೆಯುಳ್ಳವಂ ॥
ಹೀನಪಾದನದ್ರಿಯನ್ನದೇನು ಹತ್ತಲಾರ್ಪನೆ ।
ತಾನು ಪಾಡನೆಷ್ಟುಮಿನ್ನು ನಿನ್ನಯೊಲ್ಮೆಯಿಲ್ಲದಂ ॥೪೮॥
ವಂದ್ಯೆ ನಿನ್ನನಾನು ಪಾಡೆ ನಿನ್ನಯೊಲ್ಮೆಯಾದ ವೋಲ್ ।
ಮಂದಭಕ್ತನಾನು ವಾಜಪೇಯನಿಷ್ಟೆ ಪಾಡಿದೆಂ ॥
ಕುಂದದೆನ್ನಯಲ್ಪಭಕ್ತಿಯನ್ನು ಕೊಂಡು ನಿತ್ಯಮಾ ।
ನಂದದಿಂದೆ ಕಾವುದೆಮ್ಮನಾ ! ತ್ರಿಲೋಕಸುಂದರಿ ॥೪೯॥

## ವಾರ್ಧಿಕಷಟ್ಪದಿ

೧
ಜಯ ಚಂದ್ರಶೇಖರಾನಂದವಾರಿಧಿಲಹರಿ ।
೨
ಜಯ ಮಂಗಳಪ್ರಭಾರಮ್ಯೆ ಕರುಣಾಂಭೋಧಿ ।
೩
ಜಯ ಬುಧಸ್ತುತಿಸುಮಣಿಹಾರಭೂಷಿಣೆ ಶಿವಾನಂದವಿಜಯ ಪ್ರಹರ್ಷೇ ॥
೪ ೫
ಜಯ ಗಿರಿಜೆ ಗುರು-ಶುಕ್ರಶಿಷ್ಯಕುಲಸಂಗೀತೆ ।
ಜಯ ದುರ್ಗೆ ಶಿವೆ ಉಮೆ ಭವಾನಿ ನತಜನಜನನಿ ।
೬ ೭
ಜಯ ದುರಿತಪರ್ವತಾಶನಿ ವರದೆ ಜಗದಂಬೆ ಸಲಹು ! ರವಿ ಕಾಂತಿಲಲಿತೇ ॥೫೦॥

ಜಯ [೧]ನಿಮೇಷಾಭಾವರಂಗನೆಯರಾಣಿತಿಜೆ |
ಜಯ [೨]ವೃಷಭರಾಜನ ರಮಣಿ ಪರಮಕಲ್ಯಾಣಿ |
ಜಯ [೩]ಮಿಥುನಸುಖದೆ ಜಯ [೪]ಕರ್ಕಶಾಸುರಭಯಂಕರೆ ಭವ್ಯ
[೫]ಸಿಂಹಾಸನೆ ||

ಜಯ ಮತಂಗಸು[೬]ಕನ್ಯೆ ರಾಜಿತಾ[೭]ತುಳಮಹಿಮೆ |
ಜಯ [೮]ವೃಶ್ಚಿಕಕುಟಿಲಚಿಕುರೆ [೯]ಧನುಭ್ರೂಭೂಷೆ |
ಜಯ [೧೦]ಮಕರಕೇತುಮಹಿಪೀಡ್ಯೆ ಮಹಿಷಗಜ[೧೧]ಕುಂಭಹರಿ ಪ್ರೌಢ!
[೧೨]ಮೀನನಯನೆ ||೫೧||

## **ಕಂದಪದ್ಯ**

ದೈವದ ಬಲಮಾಗ್ರಹಸ |
ದ್ಭಾವೇಕ್ಷಣಬಲಮಖಿಳಬಲಂಗಳ್ಗಡ ! ಶ್ರೀ ||
ದೇವಿಯೆ ! ನೀನಿಹೆ ! ನೆನೆವೆಂ |
ಕಾವುದು ನಿನ್ನ ನತನಹ ಶಿವಾನಂದನನಾ ||೫೨||

ಶ್ರೀಶಶಿ–ರವಿಕಳೆ ಮಾಪುರ |
ದೀಶಿಯೆ ಮತ್–ಕೋಡಿಯೆಲ್ಲಮಾಂಬಿಕೆ! ಜಯಮತ್– ||
ಶ್ರೀಶ್ಯಾಮಲಾಂಬೆ ! ನೀಮ್ನಲಿ |
ಪೀ ಶರಣನ ಪೊರೆವುದುರೆ ಶಿವಾನಂದನನಾ ||೫೩||

## ವಸಂತತಿಲಕಂ

ಶ್ರೀರೇಣುಕಾಸ್ಮೃತಿಯ ನೇಮದೆ ಪಾತಿಪರ್ಗೆ ।
ಶ್ರೀ-ರಾಜಸಂತತಿ-ಸುಕಾಂತಿ-ಸುಧೀ-ಯುತಂಗಳ್ ॥
ಸೌರಭ್ಯಸೌಖ್ಯಮಿರದಪ್ಪುಗುಮಂತ್ಯದಲ್ಲಿ ।
ಸಾರಂ ವಿಮುಕ್ತಿಯುಹುದಾರ್ಯೆಯ ಲೋಭವಿಂದಂ ॥೫೪॥

## ಕಂದಪದ್ಯಂ



ರಸಿಕರ್ ಕೃತಿಯೊಳಿದರಲಿ ಭ ।
ವಿಸಿರ್ಪ ದೋಷಂಗಳನ್ನುಳಿದು ಶ್ರೀನಿಷ್ಠಾ ॥
ರಸಮಂ ಕೊಳಲಿ ಧರೆಯೊಳದು ।
ಪಸರಿಸ ಮಾಡಲಿನಿತೆ ಬಯಸೆಂ ವಿನಯದೊಳಾಂ ॥೫೫॥

---

ವರಕಾಶ್ಯಪಗೋತ್ರಜರಹ ।
ನರಸಿಂಹಜರಾಮದೀಕ್ಷಿತಸುತರ್ಯುಜ್ಞೇ ॥
ಶ್ವರದೀಕ್ಷಿತರೆನ್ನಯ ಜನ ।
ಕರುವಾಂಬೆ ಜನಿತ್ರಿ ಲೌಕಿಕಕುಲಭವೆಯಿಹರ್ ॥೫೬॥

ಅವರಾತ್ಮಜನಹನಾಂ ವಿತ ।
ತವಾಜಪೇಯೋಪನಾಮದ ಶಿವಾನಂದಂ ॥
ಶಿವೆಯೊಲವಿನಿದ ರಚಿಸ ತೊಡ ।
ಗುವನಾದೆಂ ಕ್ರೋಧಿವದ್ಯಕಾರ್ತಿಕದಿನದೊಳ್ ॥೫೭॥

## ವಸಂತತಿಲಕಂ

ಶ್ರೀಶಾಲಿವಾಹನಶಕಾನ್ವಿತಕೃಲ-ಸೇನಾ ।
ಶಾ-ಸ್ತೋಮಸಿಂ ಜಿರಿದ ಕ್ರೋಧಿಯ ಮಾಘಶುದ್ಧ ॥

ಕ್ಕಾಸಕ್ತಪೌರ್ಣಿಮೆಯು ಪ್ರೀತಿಯ ಯೋಗದಲ್ಲಿ |
ಶ್ರೀಸುಪ್ರಸಾದಮಿದು ತಾಂ ಗುರುವ್ರೋಳ್ಸಮಾಪ್ತಂ ||೫೮||

**ವಚನಂ—** ಇಂತು, ವರಲಕ್ಷ್ಮೀಶ್ವರಪುರದ, ಶ್ರೀನಿವಾಸ[೧೦]ಮೆನಿಪ ಶ್ರೀಶ[೭]ನೊಲ್ಮೆಯಿಂದೊಡವೆರೆದ ಶ್ರೀರೇಣುಕಾಂಬಿಕೆಯ ಶ್ರೀಪಾದಸೇವಕನಪ್ಪಿದೆನ್ನಿಂ, ಶಿವಾನಂದದೀಕ್ಷಿತನಿಂ ಶ್ರೀಯೊಲವಿನಿಂ

**ವಿರಚಿತಂ**




**ಜಯಮಕ್ಕೆ ಶುಭಮಕ್ಕೆ ಸಂತತಂ ಶ್ರೀ—ಸುಖಂಗಳಕ್ಕೆ.**

**ಶ್ರೀರೇಣುಕಾಂಬಾರ್ಪಣಮಿರ್ಕೆ.**

**ಉದಯೋಽಸ್ತು—ಉದಯೋಽಸ್ತು—ಉದಯೋಽಸ್ತು.**



ಶ್ರೀ

# ಆರತಿಯ ಪದಗಳು.

೧

( **ದಾಟಿ— ಆರತಿಯ ಪದಗಳ ಸಾದಾದಾಟಿ.** )

ಜಯ ದೇವಿ ಜಯ ದೇವಿ ಜಯ ಮಾತಾಖ್ಯಪುರಾಂಬೆ |
ಜಯ ರೇಣುಕೆ ! ಜಗದಂಬಿಕೆ ಮದಂಬೆ ಏಲಾಂಬೆ ||ಪಲ್ಲವಿ||

ಪಂಚಾನನ-ಹರಿ-ವಿಧಿಸತಿಶುಭರೂಪಸ್ಫುರಿತೆ |
ಪಂಚಸುವರ್ಣಾಂಚಿತವರಶುಕವಾಕ್ಸಂಮುದಿತೆ ||
ಪಂಚಾನನ ವಾಹನಭೂಷಿತೆ ಭಾರ್ಗವಮಾತೆ |
ಪಂಚೇಷುಸತಿವಿನುತೆ ವಿಷ್ಟಪಸುಂದರಿ ಲಲಿತೆ || ಜಯ ||೧||

ಕೈರವದಳನೇತ್ರೇ ಕವಿ-ಬುಧನುತಸುಚರಿತ್ರೆ |
ಕೈರವಬಾಂಧವವಕ್ತ್ರೇ ಕರಧೃತಚಾಪಾ-ಸ್ತ್ರೆ||
ಕೈರವರಿಪುರುಚಿಭರಿತೇ ಕುವಲಯವಿಖ್ಯಾತೆ |
ಕೈರವಕಾಂತಿವಿಲಸಿತೆ ನಖಸರೋನಿಲಯಸ್ಥೆ || ಜಯ ||೨||

ಶರಣಳೆ ! ನೀಂ ಭವನಾಶಿಸಿ ದಿತಿಸುತಕುಲಕಾಲೆ |
ಶರಣಜನರ ಮಂದಾರವೆ ಸಜ್ಜನಕುಲಪಾಲೆ ||
ಶರಣೀಡೆಮಗಾಗಂಬಿಕೆ ಬಹು ಕರುಣಾಶೀಲೆ |
ಶರಣಾಗತನ ಶಿವಾನಂದನ ಪೊರೆವಗಬಾಲೆ || ಜಯ ||೩||

೨

( ಆರತೀಭುವನಸುಂದರಾಚಿ ಈ ಮಹಾರಾಷ್ಟ್ರಪದದಂತೆ )

ಮಂಗಳಂ ವರದೆ ರೇಣುಕಾಂಬೆ || ತುಂಗಕಲ್ಪವು ನೀಂ ಸತರಿ
ಗಂಬೆ|| ||ಪಲ್ಲವಿ||

ಅಸುರವರಮಹಿಷೀಡ್ಯಸುಹಿಳೆ || ಸುಮಣಿಕುಂಡಲಾಂಚಿತಕ
ಪೋಲೆ||

ದ್ಯುಮಣಿರುಚಿದೀಪ್ತಮಣಿಮಾಲೆ || ವಿಮಲೆ ವರಕಲಿದೋಷ
ಕಾಲೆ ||

ಏರು|| ಕಮನೀಯಕೀರವಚನಲೋಲೆ || ಇಳವು|| ಸುಮನ
ಸಃಪ್ರಣುತ ಸು-

ಮಹಿಮಾನಿಯುತ ಸುಲೀಲಾಜನಿತ ಸೂಲ್ಲಾಸಭರಿತ ಉದ್ಘೋ
ಷ-

ಯುತಭಕ್ತಜಾಲೆ|| ಭೂಮಿಪಾಲನಪುಣ್ಯಶೀಲೆ ||ಮಂಗಳಂ ||೧||

ಚಂದನಾ-ಗರುಲಿಪ್ತವಕ್ಷೆ || ಮಂದಸುಹಸನೆ ಸುಜನರಕ್ಷೆ ||

ಇಂದಿರೆ! ವಿಧೃತವಿಬುಧಪಕ್ಷೆ || ಮಂದದಿತಿಕುಲವೃಂದಶಿಕ್ಷೆ ||

ಏರು||ಬಂಧುರೆ ಧುರಧೈರ್ಯೈಕದಕ್ಷೆ ||ಇಳವು|| *೧ ಕುಂದರದಲಲಿತೆ
*೨ ಕುವಲಯಸುಗೀತೆ

*೩ ಸುಮತ್ವಪೂರಿತೆ *೪ ಮಂಗಳಸುಚರಿತೆ *೫ ಡಿಂಡಿಮರವಾಸಕ್ತೆ ಧೀರ-

*೬ ಮಾತೆ || ವಂದಿತದೇವ-ದನುಜವನಿತೆ || ಮಂಗಳಂ ||೨||

ಪದ್ಮರುಚಿ ಶ್ರೀಕಾಳಿನೀನಾ || ಪದ್ಮವಾಸಿನಿ ಪದ್ಮೆಯಿನ್ನಾ ||

ಪದ್ಮಪೀಠಿಕೆ ವಾಣಿ ಮೇಣಾ || ಪದ್ಮಿನಿ! ಶಿವಾನಂದಜನನಿ ||

ಏರು|| ಪದ್ಮಚರಣೆ ಸುಪದ್ಮಪಾಣಿ || ಇಳವು || ಪದ್ಮನಿಭವದನೆ
ಪದ್ಮದಳನಯನೆ

ಪದ್ಮಭೃತ್ಕರ್ಣೆ ಮಹಿಷಮದಹರಣೆ ಶರಣೇಷ್ಟಪೂರ್ಣೆ ಪೂರೆ!

ಯುಪರ್ಣೆ || ಪದ್ಮಾಭರಣೆ ಶ್ರೀಶರಾಜ್ಞಿ || ಮಂಗಳಂ ||೩||

---

* ಕುಂಕುಮಮಂಡಿತೆ.

೩

(ಏಕತಾಳ)

ನಿನಗಾರತಿಯೆತ್ತುವೆ ತಾಯಿ ॥ ನಾನೆತ್ತುವೆ ನಲಿದು ಶ್ರೀದೇವಿ॥
॥ಪಲ್ಲವಿ॥

ಚಿತ್ರಮಯಾರತಿರಚಿಸಿ । ಮುತ್ತು-ರನ್ನಂಗಳನಿರಿಸಿ ॥
ಸುತ್ತಲು ಹೊಳೆಯುವ ತುಪ್ಪದಬತ್ತಿಗಳುಜ್ವಲಿಸಿ ॥ನಿನಗಾ॥೧॥
ಹರಿ-ಹರ-ವಿಧಿಗಳಲಲನೆ । ಸುರಚಿರ ವಿಭವದ ಸದನೆ ॥
ಮಿರುಗುವ ಪೂರಣದಾರತಿಬೆಳಗುವೆನೊಲಿದು ॥ನಿನಗಾ ॥೨॥
ಸುರಧೇನುರೂಪೆಯು ನೀನು । ವರದೀನಭಕ್ತನು ನಾನು ॥
ಪೊರೆ ! ಶ್ರೀಶಸುಮಾನ್ಯೆ ಶಿವಾನಂದನ ಜನನೀ ॥ನಿನಗಾ ॥೩॥

೪

ಏಕ ತಾಳ

೧ ೨

ಬೆಳಗುವೆನಾರತಿಯ ॥ ಶ್ರೀದೇವಿ ॥ ನಿನಗೆ ನಾಂ ॥ಪಲ್ಲವಿ॥
ಪ್ರಣುತಸುಕಾಂತಿಯ । ಗಣಿಸದೆ ಕುಡುತಿಹ ॥
ಮಣಿಗಣದಾರತಿಯ ॥ ಶ್ರೀದೇವಿ ॥ ॥೧॥

ತುಪ್ಪದಬತ್ತಿಗ । ಳಪ್ಪಿದ ಪೂರಣ ॥
ದ್ದಿರ್ಪಶುಭಾರತಿಯ ॥ ಶ್ರೀದೇವಿ ॥ ॥೨॥
ದೀನನತನಹ ಶಿ । ವಾನಂದೇಶ್ವರಿ ॥
ನೀನೆನ್ನ ತೋಷಿಪುದಾ ॥ ಶ್ರೀದೇವಿ



೫

( ರೂಪಕ ತಾಳ )

ಅಂಬಾ ಜಯಾ ॥ ರೇಣು ॥ ಕಾಂಬಾ ಜಯಾ ॥
ಸಂಭ್ರಮದಿಂ ಭಕ್ತರ ಸಲಹುವ ಶ್ರೀದೇವಿ ॥ಪಲ್ಲವಿ॥
ಬಾಲೇಜಯಾ॥ಮಹಾ॥ಕಾಳೀಜಯಾ ।
ಮಾಲಸೆ ಚಂದಲೆ ಶಿವೆ ನಾರಾಯಣಿ ದುರ್ಗೇ ॥ಅಂಬಾ ॥೧॥
ಶರಣ್ಯೇ ಜಯಾ ॥ಭವ॥ ಹರಣೇ ಜಯಾ ।
ಸರಸತಿ ಸರ್ವಮಂಗಳೇ ಶಂಕರಿ ಗೌರೀ ॥ ಅಂಬಾ ॥೨॥
ಲಲಿತೇ ಜಯಾ ॥ ನತಕ ॥ ಲ್ಪಲತೇ ಜಯಾ ।
ಸಲಹೆಮ್ಮ ತ್ರ್ಯಂಬಕೆ ಶಿವಾನಂದನ ಜನನೀ ॥ ಅಂಬಾ ॥೩॥

೬

( ರೂಪಕತಾಳ )

ಕುಡು ! ಕುಡು ! ಬೇಡುವೆನೀಗ ॥ ಎನ್ನ॥ಯೊಡೆಯಳೆ! ಪುಷ್ಪ
ಪ್ರಸಾದವಬೇಗ ॥ಪಲ್ಲವಿ॥
ಶ್ರೀ-ಲಕ್ಷ್ಮೀ-ಶರ್ವಾಣೀ ॥ರೂಪೆ॥ ತ್ರೈಲೋಕ್ಯಂಗಳ ಜನನಿ ॥
ಪಾಲಿಸು ಪ್ರಾರ್ಥಿಪ ನತರನ್ನು ನಲಿಸಿ ಕಲ್ಯಾಣಿ ॥ಕುಡು! ॥೧॥
ಸುಂಭ-ನಿಸುಂಭರ ತುಳಿದು । ಕುಂಭಿನಿಯನು ನೆರೆ ಕಾಯ್ದು ॥
ತುಂಬಾನಂದವ ಪಡಿಸಿದೆ ನೀಂ ತಾಯೆ ! ಸುರ-ನರರ್ಗಂದು॥
॥ ಕುಡು ॥೨॥
ಶಿವೆ! ಭಕ್ತಹಿತಾವರಣೆ । ಅವಿರಳಕರುಣಾಪೂರ್ಣೆ ॥
ಸ್ತುವಿಸಿರ್ದ ಶಿವಾನಂದನ ಪೊರೆವಭಿಮಾನದಜನನೀ ॥ಕುಡು॥೩॥

**ಶ್ರೀಮಂಗಳಂ—ಶುಭಮಂಗಳಂ—ಸಂತತಂ**

**ಶ್ರೀ—ಶುಭಜಯಮಂಗಳಂ.**

**ಉದಯೋಸ್ತು-ಉದಯೋಸ್ತು-ಉದಯೋಸ್ತು.**

**ಶ್ರೀ-ಶ್ರೀ-ಶ್ರೀ.**

# ಒಪ್ಪಿಗೆ.

॥ श्रीः ॥

## श्रीशिवः शरणम्

ವೇ. ಶಾ. ಸಂ. ಬ್ರಹ್ಮಶ್ರೀ ಶಿವಾನಂದದೀಕ್ಷಿತ ವಾಜ
ಇವರು ರಚಿಸಿದ ಶ್ರೀ ರೇಣುಕಾಂಬಾಸ್ತೋತ್ರ ಮತ್ತು ನೀತಿಬೋ
ಎಂಬವೆರಡು ಪದ್ಯಕಾವ್ಯಗಳನ್ನು ಆಮೂಲಾಗ್ರವಾಗಿ ಓದಿ
ನನುಗೆ ಪರಮಾನಂದವಾಯಿತು. ಈ ಮೊದಲೇ ಶ್ರೀದೀಕ್ಷಿತರ
ಮಾಡಿದ ಶ್ರೀ ಆರತಿಯಪದ ಮೊದಲಾದವುಗಳನ್ನು ಕೇಳಿರು
ಶ್ರೀದೀಕ್ಷಿತರವರ ನೈಸರ್ಗಿಕವೂ ಪ್ರತಿಭಾಸಂಪನ್ನವೂ ಆದ
ಗಳು ಸರಸವೂ ಕೋಮಲವೂ ಭಾವಗರ್ಭಿತವೂ ಸುಬೋಧವೂ
ವದರಿಂದ ಓದುವವರ ರಸಿಕವಾದ ಅಂತಃಕರಣವೃತ್ತಿಯನ್ನು
ರ್ಷಣಮಾಡುವದಲ್ಲದೆ ಉತ್ಕಂಠೆಯನ್ನೂ ಉಲ್ಲಾಸವನ್ನೂ
ಕೊಡುವವು. ಶ್ರೀದೀಕ್ಷಿತರವರು ಪಂಡಿತ ವಂಶದಲ್ಲಿ ಉ
ರಾದ್ದರಿಂದ ಸಂಸ್ಕೃತಭಾಷೆಯಲ್ಲಿಯೂ ಇವರ ಕವಿತ್ವಶಕ್ತಿಯು
ಶಂಸನೀಯವಾಗಿದೆ. ಕನ್ನಡವಾಙ್ಮಯದಲ್ಲಂತೂ ಇವರು ಅವಗ
ಮಾಡಿದ್ದರಿಂದ ಇವರ ಕನ್ನಡ ಕವಿತೆಗಳು ಸರಸವಾಗುವದು ಸ
ವಿಕವೇಸರಿ. ಶ್ರೀರೇಣುಕಾಂಬಾ ಸ್ತೋತ್ರವನ್ನು ಓದಿದರೆ ಸಹಜ
ಶ್ರೀದೇವಿಯಲ್ಲಿ ಎಂಥವನಿಗೂ ಪ್ರೇಮವುತ್ಪನ್ನವಾಗದೆ ಇರದು.

**ಒಟ್ಟಿಗೆ**- ಇಷ್ಟು ಅಭಿಪ್ರಾಯಹೊಂದಿ ಸಂಗ್ರಹಿಸತಕ್ಕ
ಇಷ್ಟಕಾವ್ಯವನ್ನು ಎಲ್ಲರೂ ಆಸ್ಥೆಯಿಂದ ಸಂಗ್ರಹಿಸಿ ಶ್ರೀದಿ
ರವರ ಪ್ರತಿಭೆಗೆ ವಾರ್ಧಿಕ್ಯದಲ್ಲಿಯೂಕೂಡ ಇದಕ್ಕೂ ಹೆಚ್ಚಿನ ಸು
ಯುಂಟಾಗಿ ಇನ್ನೂ ಇಂಥ ಗ್ರಂಥಗಳು ಇವರಿಂದ ಹೊರಡ
ಲೆಂದು ಜಗದೀಶ್ವರನಲ್ಲಿ ಪ್ರಾರ್ಥನೆಯದೆ.

आषाढ शु॥ १३ मंगळवार
शके १८४९
ता. १२-७--१९२७

नागेशशास्त्री उप्पिनबेटि
श्रीशंकराचार्यपाठशाला धा

ಶ್ರೀ ನೀತಿಬೋಧಿನಿಯ ಸಂಬಂಧದ ಶ್ರೀಶಾಸ್ತ್ರಿಗಳವರ
ಅಭಿಪ್ರಾಯವನ್ನು ನೀತಿಬೋಧಿನಿಯಲ್ಲಿ ಕೊಟ್ಟಿದೆ.